ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ತೋಟಗಾರಿಕೆ ಉತ್ಪನ್ನಗಳ ರಫ್ತು ಬಗ್ಗೆ

ಶ್ರೀ ಎಸ್. ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ):-

086 (498) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಚಿಕ್ಕಮಗಳೂರು ಜಿಲ್ಲೆಯ ಯಾವ ಯಾವ ಪ್ರದೇಶಗಳಲ್ಲಿ ಯಾವ ಯಾವ ತೋಟಗಾರಿಕಾ ಉತ್ಪನ್ನಗಳನ್ನು ಹೆಚ್ಚಾಗಿ ಬೆಳೆಯಲಾಗುತ್ತಿದೆ ;

(ಆ) ತೋಟಗಾರಿಕೆ ಬೆಳೆಗಳನ್ನು ಬೆಳೆಯುತ್ತಿರುವ ರೈತರಿಗೆ ಯಾವ ರೀತಿ ಉತ್ತೇಜನ ನೀಡಲಾಗುತ್ತಿದೆ ; ಸರ್ಕಾರದಿಂದ ಒದಗಿಸಿರುವ ಸವಲತ್ತುಗಳು ಯಾವುವು;

(ಇ) ಚಿಕ್ಕಮಗಳೂರು ಜಿಲ್ಲೆಯಲ್ಲಿ ಕಳೆದ 3 ವರ್ಷಗಳಲ್ಲಿ ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರದ ಎಷ್ಟು ಹಣವನ್ನು ಯಾವ ಉದ್ದೇಶಕ್ಕಾಗಿ ವೆಚ್ಚ ಮಾಡಲಾಗಿದೆ; (ವಿವರ ಒದಗಿಸುವುದು)

(ಈ) ತೋಟಗಾರಿಕಾ ಬೆಳೆಗಳನ್ನು ರಫ್ತು ಮಾಡುವ ರೈತರುಗಳಿಗೆ ಯಾವ ಸವಲತ್ತುಗಳನ್ನು ನೀಡಲಾಗುತ್ತಿದೆ ?